## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಸಂಖ್ಯೆ : 660 (625)
ಸದಸ್ಯರ ಹೆಸರು : ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ. (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 11.03.2020
ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಾರವಾರ ಜಿಲ್ಲೆಯಲ್ಲಿ ಕೃಷಿ ಇಲಾಖೆಯ ಮೂಲಕ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು ಯಾವುವು; | ಕಾರವಾರ ಜಿಲ್ಲೆಯಲ್ಲಿ ಕೃಷಿ ಇಲಾಖೆಯ ಮೂಲಕ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರಗಳನ್ನು ಅನುಬಂಧ-1 ರಲ್ಲಿ ನೀಡಿದೆ.<br><br>ಜಲಾನಯನ ಅಭಿವೃದ್ಧಿ ಇಲಾಖೆಯ ಮೂಲಕ ಪ್ರಸ್ತುತ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.<br><br>1. ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ<br>2. ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಇತರೆ ಉಪಚಾರಗಳು,<br>3. ಜಲಾನಯನ ಅಭಿವೃದ್ಧಿ ಮೂಲಕ ಬರಗಾಲ ತಡೆಯುವಿಕೆ |
| ಆ) | ಕೃಷಿ ಇಲಾಖೆಯ ವಿವಿಧ ಯೋಜನೆಗಳಿಗೆ ಕಳೆದ 3 ವರ್ಷಗಳಲ್ಲಿ ಕಾಯ್ದಿರಿಸಿ, ಖರ್ಚಾದ ಅನುದಾನ ಎಷ್ಟು; (ಜಿಲ್ಲಾವಾರು/ತಾಲ್ಲೂಕುವಾರು, ಯೋಜನೆ ಮತ್ತು ವರ್ಷವಾರು ವಿವರ ನೀಡುವುದು) | ಕಳೆದ 3 ವರ್ಷಗಳಲ್ಲಿ ಕೃಷಿ ಇಲಾಖೆ ಮತ್ತು ಜಲಾನಯನದ ವಿವಿಧ ಯೋಜನೆಗಳಡಿ ಕಾಯ್ದಿರಿಸಿದ / ಬಿಡುಗಡೆಯಾದ ಮತ್ತು ಖರ್ಚಾದ ಅನುದಾನದ ಜಿಲ್ಲಾವಾರು / ತಾಲ್ಲೂಕುವಾರು, ಯೋಜನೆ ಮತ್ತು ವರ್ಷವಾರು ವಿವರಗಳನ್ನು ಅನುಬಂಧ 2 ಮತ್ತು 3 ರಲ್ಲಿ ನೀಡಿದೆ.<br>(ಮಾಹಿತಿಯು ಹೆಚ್ಚು ಪುಟಗಳಿರುವುದರಿಂದ ಪ್ರಶ್ನೆ ಕೇಳಿದ ಸದಸ್ಯರಿಗೆ ಮಾತ್ರ ಅನುಬಂಧಗಳನ್ನು ಒದಗಿಸಿದೆ) |
| ಇ) | ಕೃಷಿ ಇಲಾಖೆಯ ಯೋಜನೆಗಳನ್ನು ಜನರಿಗೆ ತಲುಪಿಸಲು ಯೋಜನೆಗಳ ಪ್ರಚಾರಕ್ಕಾಗಿ ಹಾಗೂ ಪಾರದರ್ಶಕವಾಗಿ ಫಲಾನುಭವಿಗಳ ಆಯ್ಕೆ ಮಾಡಲು ಸರ್ಕಾರ ಕೈಗೊಂಡ ಕ್ರಮವೇನು; (ಸವಿಸ್ತಾರ ವರದಿ ನೀಡುವುದು) | ಕೃಷಿ ಇಲಾಖೆಯ ಯೋಜನೆಗಳನ್ನು ಜನರಿಗೆ ತಲುಪಿಸಲು ಯೋಜನೆಗಳ ಪ್ರಚಾರಕ್ಕಾಗಿ ಈ ಕೆಳಕಂಡಂತೆ ಕ್ರಮಗಳನ್ನು ತೆಗೆದುಕೊಳ್ಳಲಾಗಿರುತ್ತದೆ:<br>1) ಯೋಜನೆಗಳ ಫಲಕಗಳನ್ನು ಅಳವಡಿಸಲಾಗುತ್ತಿದೆ.<br>2) ವಸ್ತು ಪ್ರದರ್ಶನಗಳಲ್ಲಿ ಕೃಷಿ ಇಲಾಖೆಯ ಯೋಜನೆಗಳನ್ನು ಪ್ರದರ್ಶಿಸಿ ಪ್ರಚಾರ ಮಾಡಲಾಗುತ್ತಿದೆ.<br>3) ಹೊಸ ಯೋಜನೆಗಳ ಬಗ್ಗೆ ದಿನಪತ್ರಿಕೆಗಳಲ್ಲಿ ಜಾಹಿರಾತುಗಳನ್ನು ನೀಡಲಾಗುತ್ತಿದೆ.<br>4) ಕೃಷಿ ಮೇಳಗಳಲ್ಲಿ ಹಾಗೂ ವಿವಿಧ ವಸ್ತು ಪ್ರದರ್ಶನಗಳಲ್ಲಿ ಭಾಗವಹಿಸಿ ಕೃಷಿ ಇಲಾಖೆಯ ಯೋಜನೆಗಳನ್ನು ಪ್ರಚಾರ ಪಡಿಸಲಾಗುತ್ತಿದೆ. |

| | | |
|---|---|---|
| | | 5) ದೂರದರ್ಶನ ಮಾಧ್ಯಮಗಳಲ್ಲಿ ಕೃಷಿ ಇಲಾಖೆಯ ಯೋಜನೆಗಳ ಬಗ್ಗೆ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತಿದೆ.<br>6) ಆಕಾಶವಾಣಿ ಮಾಧ್ಯಮಗಳಲ್ಲಿ ರೈತರಿಗೆ ಇಲಾಖೆಯ ಯೋಜನೆಗಳ ಬಗ್ಗೆ ಮಾಹಿತಿ ನೀಡಲಾಗುತ್ತಿದೆ.<br>7) ಕೃಷಿ ಅಭಿಯಾನ ಕಾರ್ಯಕ್ರಮವನ್ನು ಹಂಗಾಮು ಪೂರ್ವದಲ್ಲಿ ಏರ್ಪಡಿಸಿ ಪ್ರತಿ ಹಳ್ಳಿಯಲ್ಲಿ ದೃಷ್ಯ ಮತ್ತು ಶ್ರವಣ ಮಾಧ್ಯಮದ ಮೂಲಕ ಪ್ರಚಾರ ಮಾಡಲಾಗುತ್ತಿದೆ.<br><br>ಕೃಷಿ ಇಲಾಖೆಯ ಯೋಜನೆಗಳಡಿ ಪಾರದರ್ಶಕವಾಗಿ ಫಲಾನುಭವಿಗಳ ಆಯ್ಕೆ ಮಾಡಲು ಈ ಕೆಳಕಂಡಂತೆ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ:<br><br>ರೈತರ ದತ್ತಾಂಶ ಮಾಹಿತಿಯನ್ನು ಕೃಷಿ ಮತ್ತು ಕೃಷಿ ಸಂಬಂಧಿತ ಇಲಾಖೆಗಳಲ್ಲಿ ಏಕರೂಪವಾಗಿ ಸಂಗ್ರಹಿಸಲು FRUITS (Farmers Registration and Unified beneficiary Information System) ತಂತ್ರಾಂಶವನ್ನು ಎನ್.ಐ.ಸಿ ಮತ್ತು ಇ-ಆಡಳಿತ ಇಲಾಖೆಯ ಮೂಲಕ ಸಿದ್ಧಪಡಿಸಿದ್ದು ಕೃಷಿ ಇಲಾಖೆಯಲ್ಲಿ ಅಳವಡಿಸಿಕೊಳ್ಳಲಾಗಿರುತ್ತದೆ ಹಾಗೂ ರೈತರಿಗೆ ವಿಶಿಷ್ಟ ಗುರುತಿನ ಸಂಖ್ಯೆ ನೀಡಲಾಗುತ್ತದೆ(FID).<br>ಕೃಷಿ ಇಲಾಖೆಯ ಕೆ-ಕಿಸಾನ್ ಪೋರ್ಟಲ್ ಮೂಲಕ ಕೃಷಿ ಯಾಂತ್ರೀಕರಣ, ಸೂಕ್ಷ್ಮ ನೀರಾವರಿ, ಕೃಷಿ ಸಂಸ್ಕರಣೆ, ಬೀಜ ವಿತರಣೆ, ಕೃಷಿ ಪರಿಕರಗಳ ಪರವಾನಗಿ, ಕೃಷಿ ಭಾಗ್ಯ ಯೋಜನೆ ಅನುಷ್ಠಾನಕ್ಕೆ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸಿ ಆನ್ ಲೈನ್ ವೇದಿಕೆಯ ಮುಖಾಂತರ ಅನುಷ್ಠಾನಗೊಳಿಸಲಾಗುತ್ತಿದೆ.<br>· ಜಲಾನಯನ ಅಭಿವೃದ್ಧಿ ಅಭಿವೃದ್ಧಿ ಇಲಾಖೆಯ ಮೂಲಕ ಅನುಷ್ಠಾನ ಮಾಡುತ್ತಿರುವ ಯೋಜನೆಗಳ ಕುರಿತು ಪ್ರತಿ ವರ್ಷ ಏಪ್ರಿಲ್ ಮತ್ತು ಮೇ ತಿಂಗಳ ಮಾಹೆಯಲ್ಲಿ ಕೃಷಿ ಇಲಾಖೆಯು ಪ್ರತಿ ಜಿಲ್ಲೆಯ ಹೋಬಳಿ ಮಟ್ಟದಲ್ಲಿ ಕೈಗೊಳ್ಳುವ "ಕೃಷಿ ಅಭಿಯಾನ" ಕಾರ್ಯಕ್ರಮದಲ್ಲಿ ಜಲಾನಯನ ಅಭಿವೃದ್ಧಿ ಕಾರ್ಯಕ್ರಮಗಳ ಕುರಿತು ವ್ಯಾಪಕ ಪ್ರಚಾರವನ್ನು ನೀಡಲಾಗುತ್ತಿದೆ.<br><br>ಇದಲ್ಲದೇ, ಜಲಾನಯನ ಅಭಿವೃದ್ಧಿ ಇಲಾಖೆಯಿಂದ ಅನುಷ್ಠಾನ ಮಾಡುತ್ತಿರುವ ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ ಕಾರ್ಯಕ್ರಮದ ಪೂರ್ವ ಸಿದ್ಧತಾ ಹಂತದಲ್ಲಿ ಯೋಜನಾವ್ಯಾಪ್ತಿಯ ರೈತರು ಯೋಜನೆಯ ಕುರಿತು ಗ್ರಾಮಸಭೆ, ಜಾಥಾ, ಬೀದಿನಾಟಕ, ಗೋಡೆ ಬರಹ ಹಾಗೂ ಹಸ್ತಪ್ರತಿಗಳ ಮೂಲಕ ವ್ಯಾಪಕ ಪ್ರಚಾರ ಕೈಗೊಂಡು ಯೋಜನೆಯ ಅನುಷ್ಠಾನ ಮತ್ತು ಉಪಯೋಗದ ಕುರಿತು ರೈತರಿಗೆ ಮನವರಿಕೆ ಮಾಡಿಕೊಡಲಾಗುತ್ತಿದೆ. |

| | | |
|---|---|---|
| | | ಜಲಾನಯನ ಯೋಜನೆಗಳನ್ನು ಆಯ್ದ ಜಲಾನಯನ ಪ್ರದೇಶದಲ್ಲಿ ಮಾತ್ರ ಅನುಷ್ಠಾನ ಮಾಡುತ್ತಿರುವುದರಿಂದ ಯೋಜನಾ ವ್ಯಾಪ್ತಿಯ ಎಲ್ಲಾ ಸಣ್ಣ ಮತ್ತು ಅತಿ ಸಣ್ಣ ರೈತರು ಹಾಗೂ ಆಸ್ತಿ ರಹಿತ ಕೂಲಿ ಕಾರ್ಮಿಕರು ಯೋಜನೆಯ ಫಲಾನುಭವವನ್ನು ಪಡೆಯಲು ಅರ್ಹರಾಗಿರುತ್ತಾರೆ. ಯೋಜನೆಯಡಿ ವಿಸ್ತೃತ ಯೋಜನಾ ವರದಿಯನ್ನು ತಯಾರಿಸುವಾಗ ಫಲಾನುಭವಿಗಳನ್ನು ಆಯ್ಕೆ ಮಾಡಿ ಗ್ರಾಮ ಸಭೆಯಲ್ಲಿ ಅನುಮೋದನೆ ಪಡೆದು ಅನುಮೋದಿತ ಡಿಪಿಆರ್ ನಂತೆ ಚಟುವಟಿಕೆಗಳನ್ನು ಅನುಷ್ಠಾನ ಮಾಡಲಾಗುವುದು. |
| ಈ) | ಕೃಷಿ ಇಲಾಖೆಯ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಸಿಬ್ಬಂದಿ ಕೊರತೆ ಇರುವುದು ನಿಜವೇ; ಸಿಬ್ಬಂದಿ ನೇಮಕಾತಿಗಾಗಿ ಸರ್ಕಾರ ಕೈಗೊಂಡ ಕ್ರಮಗಳೇನು? | ಕೃಷಿ ಇಲಾಖೆಯ ಯೋಜನಯನ್ನು ಅನುಷ್ಠಾನಗೊಳಿಸುವಲ್ಲಿ ಸಿಬ್ಬಂದಿ ಕೊರತೆ ಇರುತ್ತದೆ. ಸಿಬ್ಬಂದಿ ನೇಮಕಾತಿಗಾಗಿ 2018-19 ನೇ ಸಾಲಿನಲ್ಲಿ ಗ್ರೂಪ್-ಎ ಮತ್ತು ಬಿ ವೃಂದದಲ್ಲಿ ಖಾಲಿ ಇರುವ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲಾಗಿದೆ. ಮುಂಬಡ್ತಿ ಕೋಟಾದಡಿ ಖಾಲಿ ಇರುವ ಹುದ್ದೆಗಳನ್ನು ಬಡ್ತಿ ಮೂಲಕ ಭರ್ತಿ ಮಾಡಲು ಕ್ರಮವಹಿಸಲಾಗಿದೆ.<br>ಗ್ರೂಪ್ ಸಿ- ವೃಂದದಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪತ್ರ ಬರೆಯಲಾಗಿದೆ ಹಾಗೂ ಮುಂಬಡ್ತಿ ಕೋಟಾದಲ್ಲಿ ಖಾಲಿ ಇರುವ ಹುದ್ದೆಗಳನ್ನು ಬಡ್ತಿ ಮೂಲಕ ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಜಲಾನಯನ ಅಭಿವೃದ್ಧಿ ಇಲಾಖೆಗೆ ಪ್ರತ್ಯೇಕ ವೃಂದ ಮತ್ತು ನೇಮಕಾತಿ ನಿಯಮಗಳು ಇರುವುದಿಲ್ಲ. ಕೃಷಿ, ಅರಣ್ಯ, ತೋಟಗಾರಿಕೆ, ಪಶುಸಂಗೋಪನೆ ಹಾಗೂ ಇತರೆ ಇಲಾಖೆಗಳ ಅಧಿಕಾರಿ/ನೌಕರರು ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದಾರೆ. ಜಿಲ್ಲಾ ಮಟ್ಟದಲ್ಲಿ ಅರಣ್ಯ, ತೋಟಗಾರಿಕೆ ಘಟಕದ ಸಿಬ್ಬಂದಿಗಳ ಕೊರತೆ ಇರುತ್ತದೆ. ಸಿಬ್ಬಂದಿಗಳ ನೇಮಕಾತಿಯನ್ನು ಆಯಾ ಮಾತೃ ಇಲಾಖೆಗಳಿಂದಲೇ ನಿರ್ವಹಿಸಲಾಗುತ್ತಿದೆ. |

ಸಂಖ್ಯೆ:AGRI-AML-53/2020

(ಬಿ.ಸಿ.ಪಾಟೀಲ್)
ಕೃಷಿ ಸಚಿವರು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 660 (625) ಕ್ಕೆ ಅನುಬಂಧ-1

ಕಾರವಾರ ಜಿಲ್ಲೆಯಲ್ಲಿ ಕೃಷಿ ಇಲಾಖೆಯ ಮೂಲಕ ಅನುಷ್ಠಾನಗೊಳ್ಳುತ್ತಿರುವ ಯೋಜನೆಗಳ ವಿವರ

| ಕ್ರ.ನಂ | ಯೋಜನೆಗಳ ಹೆಸರು |
|---|---|
| 1. | ಬಿತ್ತನೆ ಬೀಜ ವಿತರಣೆ ಕಾರ್ಯಕ್ರಮ |
| 2. | ಕೃಷಿ ಜಾತ್ರೆ ವಸ್ತು ಪ್ರದರ್ಶನ ಕಾರ್ಯಕ್ರಮ |
| 3. | ಕೃಷಿ ಅಭಿಯಾನ |
| 4. | ರೈತರ ಆಕಸ್ಮಿಕ ಮರಣ ಮತ್ತು ಬಣವೆಗಳ ನಷ್ಟ ಪರಿಹಾರ |
| 5. | ಆತ್ಮಹತ್ಯೆ ಕೈಗೊಂಡ ರೈತರಿಗೆ ಪರಿಹಾರ ಧನ |
| 6. | ಕೃಷಿ ಯಂತ್ರೋಪಕರಣಗಳ ಬಾಡಿಗೆ ಆಧಾರಿತ ಸೇವಾ ಕೇಂದ್ರ |
| 7. | ಕೃಷಿ ಯಾಂತ್ರೀಕರಣ |
| 8. | ಕೃಷಿ ಉತ್ಪನ್ನಗಳ ಸಂಸ್ಕರಣೆ |
| 9. | ಮಣ್ಣಿನ ಸತ್ವ ಹೆಚ್ಚಿಸುವಿಕೆ ಯೋಜನೆ |
| 10. | ಲಘು ನೀರಾವರಿ ಯೋಜನೆ |
| 11. | ಮಣ್ಣು ಆರೋಗ್ಯ ಅಭಿಯಾನ |
| 12. | ಸಾವಯವ ಕೃಷಿ ಕಾರ್ಯಕ್ರಮ |
| 13. | ಶೂನ್ಯ ಬಂಡವಾಳ ನೈಸರ್ಗಿಕ ಕೃಷಿ ಯೋಜನೆ |
| 14. | ರೈತ ಸಿರಿ ಯೋಜನೆ |
| 15. | ಕರಾವಳಿ ಪ್ಯಾಕೇಜ್ |
| 16. | ಕೃಷಿ ಭಾಗ್ಯ ಯೋಜನೆ |
| 17. | ರಾಷ್ಟ್ರೀಯ ಆಹಾರ ಭದ್ರತಾ ಯೋಜನೆ |
| 18. | ಸೂಕ್ಷ್ಮ ನೀರಾವರಿ ಯೋಜನೆ |